# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಕಾಂತರಾಜ್ (ಬಿಎಂಎಲ್)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 971

ಉತ್ತರಿಸಬೇಕಾದ ದಿನಾಂಕ : 21.12.2021

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಸಹಕಾರ ಇಲಾಖೆಯ ಮೂಲಕ ಕಳೆದ 3 ವರ್ಷಗಳಿಂದ ಅನುಷ್ಠಾನಗೊಂಡಿರುವ ಮಹಿಳಾ ಪರ ಯೋಜನೆಗಳಾವುವು; ಈ ಯೋಜನೆಗಳಿಗಾಗಿ ನಿಗದಿಪಡಿಸಿದ ಅನುದಾನವೆಷ್ಟು; ಮತ್ತು ವಿನಿಯೋಗಿಸಿರುವ ಅನುದಾನದ ಮೊತ್ತವೆಷ್ಟು; (ವರ್ಷವಾರು, ಜಿಲ್ಲಾವಾರು ವಿವರವಾದ ಮಾಹಿತಿ ನೀಡುವುದು)</td><td>ಸಹಕಾರ ಇಲಾಖೆಯ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಮಹಿಳಾ ಪರ ಯೋಜನೆಗಳಿಗೆ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆ ಮಾಡಿ ವೆಚ್ಚ ಮಾಡಿರುವ ಅನುದಾನದ ವಿವರಗಳು ಈ ಕೆಳಕಂಡಂತಿರುತ್ತದೆ.<br>(ರೂ. ಲಕ್ಷಗಳಲ್ಲಿ)
<table>
<tr><th rowspan="2">ಕ್ರ ಸಂ</th><th rowspan="2">ಯೋಜನೆ</th><th colspan="2">2018-19</th><th colspan="2">2019-20</th><th colspan="2">2020-21</th></tr>
<tr><th>ಬಿಡುಗಡೆ</th><th>ವೆಚ್ಚ</th><th>ಬಿಡುಗಡೆ</th><th>ವೆಚ್ಚ</th><th>ಬಿಡುಗಡೆ</th><th>ವೆಚ್ಚ</th></tr>
<tr><td>1</td><td>ಮಹಿಳೆಯರನ್ನು ಎಲ್ಲಾ ವಿಧದ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಸರ್ಕಾರದಿಂದ ಷೇರು ಸಹಾಯಧನ ನೀಡುವ ಯೋಜನೆ</td><td>237.70</td><td>237.70</td><td>74.47</td><td>74.47</td><td>75.41</td><td>75.41</td></tr>
<tr><td>2</td><td>ಮಹಿಳಾ ಸ್ವಸಹಾಯ ಗುಂಪುಗಳಿಗೆ ಡಿ.ಸಿ.ಸಿ ಬ್ಯಾಂಕುಗಳ ಮೂಲಕ ರೂ.5.00</td><td>6000.02</td><td>6000.02</td><td>8330.30</td><td>8330.30</td><td>8650</td><td>8650</td></tr>
</table>
</td></tr>
</table>

<table>
<tr>
<td></td>
<td></td>
<td>
<table>
<tr><td></td><td>ಲಕ್ಷದವರೆಗಿನ ಸಾಲವನ್ನು ಶೂನ್ಯ ಬಡ್ಡಿ ದರದಲ್ಲಿ ಮತ್ತು ಸ್ವ-ಉದ್ಯೋಗ ಕೈಗೊಳ್ಳಲು ರೂ.5.00 ಲಕ್ಷದಿಂದ ರೂ.10.00 ಲಕ್ಷಗಳವರೆಗಿನ ಸಾಲವನ್ನು ಶೇ.4 ರ ಬಡ್ಡಿದರದಲ್ಲಿ ವಿತರಿಸುವ ಯೋಜನೆ</td><td></td><td></td><td></td><td></td><td></td><td></td></tr>
</table>
ಸದರಿ ಯೋಜನೆಗಳಲ್ಲಿನ ಕ್ರ.ಸಂ.01 ರ ಯೋಜನೆಯ ಜಿಲ್ಲಾವಾರು ವಿವರವನ್ನು ಅನುಬಂಧ-1 ರಲ್ಲಿ ಹಾಗೂ ಕ್ರ.ಸಂ.02 ರ ಯೋಜನೆಯ ಜಿಲ್ಲಾವಾರು ವಿವರವನ್ನು ಅನುಬಂಧ-2 ರಲ್ಲಿ ನೀಡಲಾಗಿದೆ.
</td>
</tr>
<tr>
<td>ಆ)</td>
<td>ಪ್ರಿಯದರ್ಶಿನಿ ಯೋಜನೆ ಎಂದರೇನು; ಯಾವಾಗ ಜಾರಿಗೆ ಬಂದಿದೆ; ಈ ಯೋಜನೆಯಡಿ ಮಹಿಳಾ ಸಹಕಾರ ಸಂಘಗಳ ಸ್ಥಾಪನೆಗೆ ಇರುವ ಮಾನದಂಡಗಳೇನು; (ವಿವರವಾದ ಮಾಹಿತಿ ನೀಡುವುದು)</td>
<td>ರಾಜ್ಯದಲ್ಲಿರುವ ಮಹಿಳೆಯರನ್ನು ಸಾಮಾಜಿಕ ಹಾಗೂ ಆರ್ಥಿಕವಾಗಿ ಸದೃಡಗೊಳಿಸುವ ದೃಷ್ಟಿಯಿಂದ ಹಾಗೂ ಸಹಕಾರ ಕ್ಷೇತ್ರದ ಮುಖ್ಯ ವಾಹಿನಿಗೆ ತರುವ ಉದ್ದೇಶದಿಂದ ಮಹಿಳಾ ಸಹಕಾರ ಸಹಕಾರ ಸಂಘಗಳನ್ನು ರಚಿಸಲು ಹಾಗೂ ಮಹಿಳೆಯರನ್ನು ಎಲ್ಲಾ ವಿಧದ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಸರ್ಕಾರದಿಂದ ಷೇರು ಸಹಾಯಧನವನ್ನು ಮಂಜೂರು ಮಾಡುವ ಉದ್ದೇಶದಿಂದ "ಪ್ರಿಯದರ್ಶಿನಿ" ಎಂಬ ಯೋಜನೆಯನ್ನು 2014-15ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲಾಗಿದೆ. ಸದರಿ ಯೋಜನೆಯ ಮಾನದಂಡಗಳನ್ನು ಅನುಬಂಧ-3 ರಲ್ಲಿ ನೀಡಲಾಗಿದೆ.<br><br>ಮುಂದುವರೆದು, 2015-16 ನೇ ಸಾಲಿನಲ್ಲಿ ಸರ್ಕಾರದ ಆದೇಶ ಸಂಖ್ಯೆ: ಸಿಒ 154 ಸಿಎಲ್ಎಸ್ 2015 ದಿನಾಂಕ:19-06-2015 ರನ್ವಯ ಪ್ರಿಯದರ್ಶಿನಿ ಯೋಜನೆ, ಆಶಾಕಿರಣ ಯೋಜನೆ ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತರನ್ನು ಸದಸ್ಯರನ್ನಾಗಿ ನೋಂದಾಯಿಸುವ ಯೋಜನೆಗಳನ್ನು ಒಗ್ಗೂಡಿಸಿ ಇದರೊಂದಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳಲ್ಲಿ ಸದಸ್ಯರಾಗಿಲ್ಲದ ಪ್ರತಿ ಬಿಪಿಎಲ್ ಕುಟುಂಬದ ಒಬ್ಬರನ್ನು ಸದಸ್ಯರನ್ನಾಗಿ ನೋಂದಾಯಿಸಲು ಷೇರು ಸಹಾಯಧನ ಮಂಜೂರು ಮಾಡುವ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.</td>
</tr>
</table>

ಇ) ಪ್ರಿಯದರ್ಶಿನಿ ಯೋಜನೆಯಡಿ ತುಮಕೂರು ಜಿಲ್ಲೆಯಲ್ಲಿ ಎಷ್ಟು ಮಹಿಳಾ ಸಹಕಾರಿ ಸಂಘವನ್ನು ಸ್ಥಾಪಿಸಲಾಗಿದೆ; ಅವುಗಳಿಗೆ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ; (ತಾಲ್ಲೂಕುವಾರು ವಿವರವಾದ ಮಾಹಿತಿ ನೀಡುವುದು)

2014–15ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದ ಪ್ರಿಯದರ್ಶಿನಿ ಯೋಜನೆಯನ್ನು 2015–16ನೇ ಸಾಲಿನಲ್ಲಿ ಮಹಿಳೆಯರನ್ನು ಎಲ್ಲಾ ವಿಧದ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸುವ ಯೋಜನೆ ಎಂಬ ನಾಮಾಂಕಿತದಲ್ಲಿ ಅನುಷ್ಠಾನಗೊಳಿಸಲಾಗುತ್ತಿದ್ದು, ಸದರಿ ಯೋಜನೆಯಡಿ ತುಮಕೂರು ಜಿಲ್ಲೆಯಲ್ಲಿ ಮಹಿಳಾ ಸಹಕಾರ ಸಂಘಗಳನ್ನು ಸ್ಥಾಪಿಸಲು ಬಿಡುಗಡೆ ಮಾಡಿರುವ ಅನುದಾನದ ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ.

(ರೂ.ಲಕ್ಷಗಳಲ್ಲಿ)

| ಕ್ರ.ಸಂ. | ವರ್ಷ | ತಾಲ್ಲೂಕು | ಸಹಕಾರ ಸಂಘದ ಹೆಸರು | ಬಿಡುಗಡೆ ಮಾಡಿರುವ ಅನುದಾನ |
|---|---|---|---|---|
| 1 | 2014–15 | --- | --- | --- |
| 2 | 2015–16 | ತುಮಕೂರು | ಶ್ರೀ ಶಾಂಭವಿ ಮಹಿಳಾ ಪತ್ತಿನ ಸಹಕಾರ ಸಂಘ ನಿ, ತುಮಕೂರು | 5.00 |
| 3 | 2016–17 | --- | --- | --- |
| 4 | 2017–18 | ತುಮಕೂರು | ಶ್ರೀ ಲಕ್ಷ್ಮಿ ಮಹಿಳಾ ಪತ್ತಿನ ಸಹಕಾರ ಸಂಘ ನಿ, ಕ್ಯಾತ್ಸಂದ್ರ | 4.00 |
| 5 | 2018–19 | ತುಮಕೂರು | ಶ್ರೀ ಅನ್ನಪೂರ್ಣ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿ ಲಿ, ತುಮಕೂರು | 2.00 |
| 6 | 2019–20 | --- | --- | --- |
| 7 | 2020–21 | --- | --- | --- |

| | | |
|---|---|---|
| ಈ) | ಈ ಯೋಜನೆಗಾಗಿ ತುಮಕೂರು ಜಿಲ್ಲೆಗೆ ಎಷ್ಟು ಹಣ ಬಿಡುಗಡೆ ಮಾಡಲಾಗಿದೆ; ಇದರ ಬಳಕೆಯಾಗಿದೆಯೇ? (ವಿವರವಾದ ಮಾಹಿತಿ ನೀಡುವುದು) | 2014–15 ನೇ ಸಾಲಿನಲ್ಲಿ ಪ್ರಿಯದರ್ಶಿನಿ ಯೋಜನೆಯಡಿ ಹಾಗೂ 2015–16 ರಿಂದ 2020–21 ನೇ ಸಾಲಿನವರೆಗೆ ಮಹಿಳೆಯರನ್ನು ಎಲ್ಲಾ ವಿಧದ ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸುವ ಯೋಜನೆಗೆ ತುಮಕೂರು ಜಿಲ್ಲೆಗೆ ಬಿಡುಗಡೆ ಮಾಡಿ ವೆಚ್ಚ ಮಾಡಿರುವ ಅನುದಾನದ ವಿವರ ಈ ಕೆಳಕಂಡಂತಿರುತ್ತದೆ. |

(ರೂ.ಲಕ್ಷಗಳಲ್ಲಿ)

| ಕ್ರ.ಸಂ | ವರ್ಷ | ಬಿಡುಗಡೆ ಮಾಡಿರುವ ಮೊತ್ತ | ವೆಚ್ಚ ಮಾಡಿರುವ ಮೊತ್ತ | ಷರಾ |
|---|---|---|---|---|
| 1 | 2014–15 | 0 | 0 | – |
| 2 | 2015–16 | 25.05 | 25.05 | – |
| 3 | 2016–17 | 2.95 | 2.95 | – |
| | 2017–18 | 6.115 | 6.115 | – |
| 5 | 2018–19 | 8.421 | 8.421 | -- |
| 6 | 2019–20 | 0.60 | 0.60 | -- |
| 7 | 2020–21 | 2.00 | 2.00 | -- |
| | ಒಟ್ಟು | **45.136** | **45.136** | |

**ಸಂಖ್ಯೆ: ಸಿಒ 379 ಸಿಎಲ್‌ಎಸ್ 2021**

**(ಎಸ್.ಟಿ. ಸೋಮಶೇಖರ್)**

**ಸಹಕಾರ ಸಚಿವರು**